## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 951(1302) |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಅರುಣಶಹಪುರ(ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 15.03.2021 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಅನುದಾನಿತ ಪ್ರಾಥಮಿಕ, ಮತ್ತು ಪೌಢ ಶಿಕ್ಷಣ ಹಾಗೂ ಪದವಿ ಪೂರ್ವ ಶಾಲಾ ಕಾಲೇಜುಗಳಲ್ಲಿ ನಿವೃತ್ತಿ, ಮರಣ, ಇತ್ಯಾದಿ ಕಾರಣಗಳಿಂದಾಗಿ ತೆರವಾದ ಹುದ್ದೆಗಳನ್ನು ಭರ್ತಿ ಮಾಡಲು ಯಾವ ವರ್ಷದವರೆಗೆ ಅನುಮತಿ ನೀಡಲಾಗಿದೆ; ಇಲ್ಲಿಯವರೆಗೂ ಭರ್ತಿ ಮಾಡಲಾಗಿರುವ ಹುದ್ದೆಗಳ ಸಂಖ್ಯೆ ಎಷ್ಟು; | **ಅನುದಾನಿತ ಪ್ರಾಥಮಿಕ:**<br>ಅನುದಾನಿತ ಪ್ರಾಥಮಿಕ ಶಾಲೆಗಳಲ್ಲಿ ಪ್ರಸ್ತುತ ಅಗತ್ಯಕ್ಕಿಂತ ಹೆಚ್ಚುವರಿ ಶಿಕ್ಷಕರು ಕಾರ್ಯನಿರ್ವಹಿಸುತ್ತಿದ್ದು, ಹೆಚ್ಚುವರಿ ಅನುದಾನಿತ ಹುದ್ದೆಗಳು ಖಾಲಿಯಾದಲ್ಲಿ ಅಥವಾ ಒಂದು ಖಾಸಗಿ ಪ್ರಾಥಮಿಕ ಶಾಲೆಯನ್ನು ಸಹಾಯಾನುದಾನಕ್ಕೆ ಒಳಪಡಿಸಿದ ಪ್ರಥಮ ಸಂದರ್ಭದಲ್ಲಿ ಕೆಲವು ಪ್ರಾಥಮಿಕ ಶಾಲಾ ಶಿಕ್ಷಕರ ಹುದ್ದೆಗಳನ್ನು ಸಹಾಯಾನುದಾನಕ್ಕೆ ಒಳಪಡಿಸದೇ ಉಳಿದಿದ್ದಲ್ಲಿ ಅಂತಹ ಖಾಲಿ ಹುದ್ದೆಗಳನ್ನು ಹೆಚ್ಚುವರಿ ಶಿಕ್ಷಕರುಗಳಿಂದ ತುಂಬಿಕೊಳ್ಳಬೇಕೆ ಹೊರತು ನೇರ ನೇಮಕಾತಿ ಮಾಡಿಕೊಳ್ಳತಕ್ಕದ್ದಲ್ಲ ಎಂಬುದಾಗಿ ಸರ್ಕಾರದ ಸುತ್ತೋಲೆ ಸಂಖ್ಯೆ:ಇಡಿ 267 ಪಿಎಂಸಿ 2007, ದಿನಾಂಕ:12.10.2007 ಆದೇಶಿಸಲಾಗಿದೆ.<br><br>**ಪೌಢಶಿಕ್ಷಣ, ಪದವಿ ಪೂರ್ವ:-**<br>ಪದವಿ ಪೂರ್ವ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿನ ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ದಿನಾಂಕ: 31.12.2015ರ ಅಂತ್ಯಕ್ಕೆ ನಿವೃತ್ತಿ, ಮರಣ, ರಾಜಿನಾಮೆ ಇತ್ಯಾದಿ ಕಾರಣಗಳಿಂದ ಖಾಲಿ ಉಂಟಾಗಿರುವ ಹುದ್ದೆಗಳ ಪೈಕಿ ಈಗಾಗಲೇ ಅನುಮೋದನೆಗೊಂಡು ನೇಮಕಾತಿ ಪ್ರಕ್ರಿಯೆಯು ಇಲಾಖೆಯ ಹಂತದಲ್ಲಿ ಬಾಕಿ ಇರುವ 173 ಬೋಧಕ ಹುದ್ದೆಗಳು ಮತ್ತು ಪೌಢಶಿಕ್ಷಣ ಇಲಾಖೆಗೆ ಸಂಬಂಧಿಸಿದ 257 ಬೋಧಕ ಹುದ್ದೆಗಳಿಗೆ ನೇಮಕಾತಿ ಆದೇಶವನ್ನು 2021-22ನೇ ಶೈಕ್ಷಣಿಕ ಪ್ರಾರಂಭಗೊಂಡ ನಂತರ (ಜೂನ್ ಅಥವಾ ಜುಲೈ-2021) ನೀಡಲು ಆರ್ಥಿಕ ಇಲಾಖೆ ಸಹಮತಿ ನೀಡಿದೆ. |
| ಆ | ಇಲ್ಲಿಯವರೆಗೂ ಭರ್ತಿ ಮಾಡಲಾಗಿರುವ ಹುದ್ದೆಗಳ ಸಂಖ್ಯೆ ಎಷ್ಟು; ಹಾಗೂ ಬಾಕಿ ಉಳಿದಿರುವ ಹುದ್ದೆಗಳ ಸಂಖ್ಯೆ ಎಷ್ಟು; (ಸಂಸ್ಥೆವಾರು; ವಿಜಯಪುರ, ಬಾಗಲಕೋಟೆ, ಬೆಳಗಾವಿ, ಚಿಕ್ಕೋಡಿ ಜಿಲ್ಲೆಗಳ ಮಾಹಿತಿ ನೀಡುವುದು) | ಇಲ್ಲಿಯವರೆಗೂ ಭರ್ತಿ ಮಾಡಿರುವ ಹುದ್ದೆಗಳು ಮತ್ತು ಬಾಕಿ ಉಳಿದಿರುವ ಹುದ್ದೆಗಳ ವಿವರಗಳು ಕೆಳಕಂಡಂತಿರುತ್ತದೆ. |

| ಕ್ರ.ಸಂ | ವಲಯ | ಭರ್ತಿ ಮಾಡಿರುವ ಹುದ್ದೆಗಳ ಸಂಖ್ಯೆ | ಬಾಕಿ ಉಳಿದಿರುವ ಹುದ್ದೆಗಳ ಸಂಖ್ಯೆ |
|---|---|---|---|
| 1 | ಬೆಳಗಾವಿ | 16 | 52 |
| 2 | ಬಾಗಲಕೋಟೆ | -- | 50 |
| 3 | ಚಿಕ್ಕೋಡಿ | 23 | 139 |
| 4 | ವಿಜಯಪುರ | 09 | 54 |

| | | |
|---|---|---|
| ಇ | ಪ್ರಸ್ತುತ 2015ರ ನಂತರದಲ್ಲಿ ನಿವೃತ್ತಿ, ಮರಣ, ಇತ್ಯಾದಿ ಕಾರಣಗಳಿಂದಾಗಿ ತೆರವಾದ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕ್ರಮವಹಿಸುವುದೇ; ಸದರಿ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಅನ್ವಯಿಸುವುದಿಲ್ಲ. |
| ಈ | ಇದ್ದಲ್ಲಿ ಯಾವ ವರ್ಷದವರೆಗೆ ವಿಸ್ತರಿಸಲು ಸರ್ಕಾರ ಚಿಂತನೆ ನಡೆಸಿದೆ? (ವಿವರವನ್ನು ಒದಗಿಸುವುದು) | |

ಇಪಿ 112 ಎಸ್‌ಇಎಸ್ 2021

**(ಎಸ್ ಸುರೇಶ್ ಕುಮಾರ್)**
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು